KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜನವರಿ ೧೩, ೨೦೧೧ (ಪುಷ್ಯ ೨೩, ಶಕ ವರ್ಷ ೧೯೩೨) | ಸಂಚಿಕೆ ೨ |
|---|---|---|


## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**PROCEEDINGS OF THE DISTRICT AND SESSIONS COURT, BAGALKOT**

**NOTIFICATION (NOTARY) 1/2010**

**DATED:22-12-2010**

Applications are invited from eligible persons for appointment to TWO POSTS of Notary for "BANHATTI' REVENUE AREA" in the newly created posts as per Government Order No. LAW.87.LCL.2010 Dated:02.11.2010. The persons who fulfill the minimum qualifications prescribed under Rule 3 of the Notaries Rules, 1956 as on the last date fixed for receipt of applications may apply in the form of memorial duly countersigned and addressed to the under signed along with copies of necessary documents relating to place of residence, age, qualification, enrolment details, experience etc., in duplicate, so as to reach the undersinged on or before 22-01.2011. The applications should also be enclosed with the details as to whether they are performing any duties under Rule 12 of the Karnataka Law Officers (Appointment and Conditions of Service) Rules, 1977.

Place: Bagalkot **H.B. PRABHAKARA SHASTRY**

Date:22-12-2010 District and Sessions Judge, Bagalkot.

PR-2

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಚಾಮರಾಜನಗರ**

**ಅಧಿಸೂಚನೆ ಸಂಖ್ಯೆ: ಎಡಿಎಮ್ಎನ್ 3513/ 2010, ದಿನಾಂಕ:27ನೇ ಡಿಸೆಂಬರ್, 2010**

**ವಿಷಯ:** ಶೀಘ್ರಲಿಪಿಗಾರರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** 1) ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: LCA-I/220/96 ದಿನಾಂಕ:08.03.2010ರ ಜೊತೆ ಲಗತ್ತಿಸಿರುವ ಶೆಡ್ಯೂಲ್–IX ರಲ್ಲಿ ತೋರಿಸಿರುವಂತೆ ಹೊಸದಾಗಿ ಸೃಜಿಸಲಾಗಿರುವ 27 ಹುದ್ದೆಗಳ ನೇಮಕಾತಿಗೆ ನೀಡಲಾಗಿರುವ ಅನುಮತಿ.

2) ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅನುಮತಿ ಪತ್ರ ಸಂಖ್ಯೆ: LCA-II.164/2009 ದಿನಾಂಕ:18.03.2010.

3) ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) ನಿಯಮಗಳು, 1982.

4) ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007.

ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ 4 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ

ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕ:29.01.2011 ರಂದು ಸಂಜೆ 5 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ:29.01.2011 ಸಂಜೆ 5.00 ಗಂಟೆ.**

**ಅರ್ಜಿ ಸಲ್ಲಿಸಬೇಕಾದ ವಿಳಾಸ: ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ.**

(1) ಹುದ್ದೆಯ ಪದನಾಮ: ಶೀಘ್ರಲಿಪಿಗಾರ

ಖಾಲಿ ಹುದ್ದೆಗಳ ಸಂಖ್ಯೆ: 04

ವೇತನ ಶ್ರೇಣಿ: 7275–175–7800–200–8600–225–9500–250–10500–300–12300–350–13350 ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ:** ರೋಸ್ಟರಿನ 3ನೇ ಬಿಂದುವಿನಿಂದ 6ನೇ ಬಿಂದುವಿನ ತನಕ.

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಒಟ್ಟು |
|---|---|---|---|---|
| ಪರಿಶಿಷ್ಟ ಪಂಗಡ | 1 | – | – | 1 |
| ಪ್ರವರ್ಗ–1 | 1 | – | – | 1 |
| ಸಾಮಾನ್ಯ ವರ್ಗ | – | 1 | 1 | 2 |
| **ಒಟ್ಟು** | **2** | **1** | **1** | **4** |

**ಶೈಕ್ಷಣಿಕ ವಿದ್ಯಾರ್ಹತೆ:**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

3) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ.

**ಆಯ್ಕೆ ವಿಧಾನ:**

ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಾನುಸಾರ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ:** ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು.

**ವಯೋಮಿತಿ:**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

2) ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 35 ವರ್ಷ ಮೀರಿರಬಾರದು |
| ಪ್ರವರ್ಗ 2ಎ, 2ಬಿ, 3ಎ, 3ಬಿ | 38 ವರ್ಷ ಮೀರಿರಬಾರದು |
| ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 | 40 ವರ್ಷ ಮೀರಿರಬಾರದು |

1) ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು)

2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ ವರ್ಗಾವಣೆ ಪ್ರಮಾಣ ಪತ್ರ/ ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗದ ಪ್ರತಿ ಸಲ್ಲಿಸಬೇಕು.

3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ಗಳ ಮೀಸಲಾತಿ ಪ್ರಮಾಣಪತ್ರಗಳನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)

4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ ಪ್ರತಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)

5) ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ ಅಥವಾ ವಿದ್ಯಾಲಯದಿಂದ ಪಡೆದ ನಡತೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಪ್ರತಿಯನ್ನು ಲಗತ್ತಿಸತಕ್ಕದ್ದು ಹಾಗೂ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಅರ್ಜಿ ಸಲ್ಲಿಸುವ ದಿನಾಂಕದ 6 ತಿಂಗಳ ಒಳಗೆ ಪಡೆದ 2 ನಡತೆ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು (ಗಣ್ಯ ವ್ಯಕ್ತಿಗಳ ರುಜುವಿನಡಿಯಲ್ಲಿ ಹೆಸರು ಮತ್ತು ಮೊಹರು ಕಡ್ಡಾಯವಾಗಿ ಇರತಕ್ಕದ್ದು).

**ಇತರ ಸೂಚನೆಗಳು:**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

3) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ ಲಗತ್ತಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

4) ಶೀಘ್ರಲಿಪಿಗಾರ, ಹುದ್ದೆಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅರ್ಹ ಅಭ್ಯರ್ಥಿಗಳಿಗೆ ಮಾತ್ರ 1:5ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.

5) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಅಭ್ಯರ್ಥಿಗಳಿಗೆ ಸೂಚನೆ:**

1) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

2) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

4) ಅರ್ಜಿದಾರರು "ಶೀಘ್ರಲಿಪಿಗಾರ ಹುದ್ದೆಗೆ ಅರ್ಜಿ" ಎಂದು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

5) ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5.00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟ್ಯಾಂಪ್) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.

6) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

7) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

8) ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದು ಅರ್ಜಿಗಳನ್ನು ಅಂಚೆ ಮೂಲಕ ಸಲ್ಲಿಸುವುದು ಅಥವಾ ಖುದ್ದಾಗಿ ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

**ಸಾಮಾನ್ಯ ಸೂಚನೆ:**

1) ನೈತಿಕ ದುರ್ನಡತೆಯಿಂದಾಗಿ/ ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ ಕೇಂದ್ರ/ ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

2) ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

3) ಅಭ್ಯರ್ಥಿಗಳ ಆಯ್ಕೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

4) ಪಿಂಚಣಿ ಸೌಲಭ್ಯ: ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ (ಎಸ್‌ಪಿಎಲ್) 04 ಪಿಟಿಐ 2005, ದಿನಾಂಕ:31.03.2006ರಂತೆ.

**ವಿಶೇಷ ಸೂಚನೆ:**

ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ, ಅಂಚೆ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಮಾಹಿತಿಯನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡು ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಎ.ಸಿ. ವಿದ್ಯಾಧರ**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಾಮರಾಜನಗರ.

**ಅರ್ಜಿ ನಮೂನೆ**

ಇತ್ತೀಚಿನ ಭಾವಚಿತ್ರ ಲಗತ್ತಿಸಿ ಸಹಿ ಮಾಡಬೇಕು.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.

ಮಾನ್ಯರೇ,

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ: ಎಡಿಎಂಎನ್/ 3513/2010 ದಿನಾಂಕ:27.12.2010ರ ಪ್ರಕಾರ ಶೀಘ್ರಲಿಪಿಗಾರರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1. | ಅಭ್ಯರ್ಥಿಯ ಹೆಸರು | | | | |
| 2. | ತಂದೆಯ/ ತಾಯಿಯ/ ಗಂಡನ ಹೆಸರು | | | | |
| 3. | ಪೂರ್ಣ ವಿಳಾಸ | | | | |
| 4. | ಜನ್ಮ ದಿನಾಂಕ ಮತ್ತು ವಯಸ್ಸು | | | | |
| 5. | ಲಿಂಗ | ಪುರುಷ/ ಮಹಿಳೆ | | | |
| 6. | ವಿವಾಹಿತರಾಗಿದ್ದರೆ ಗಂಡನ ಅಥವಾ ಹೆಂಡತಿಯ ಹೆಸರು | | | | |
| 7. | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | | |
| 8. | ರಾಷ್ಟ್ರೀಯತೆ:<br>ಜಾತಿ/ ಉಪಜಾತಿ: | | | | |
| 9. | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು: (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ: | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | ಎಸ್.ಎಸ್.ಎಲ್.ಸಿ./ ತತ್ಸಮಾನ ಪರೀಕ್ಷೆ | | | | |
| ಬಿ | ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಸಿ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಇ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಎಫ್ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಜಿ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಹೆಚ್ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 10. | ಜಾತಿ/ ಗ್ರಾಮೀಣ/ ಮಾಜಿ ಸೈನಿಕ/ ಅಂಗವಿಕಲ/ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11. | ಸಲ್ಲಿಸಲು ಇಚ್ಛೆ ಪಡುವ ಇತರೆ ಯಾವುದಾದರೂ ವಿವರಗಳು | | | | |

**ಸೂಚನೆ:** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಿಗಳ ದೃಢೀಕರಣ ಪತ್ರ**

ಶ್ರೀ/ ಶ್ರೀಮತಿ.............. ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: ............. ರಿಂದ............ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು.................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು............ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ದಿನಾಂಕ: ಪದನಾಮ:

ಕಛೇರಿಯ ಮೊಹರು:

ಪಿ.ಆರ್. 1

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು–83**

**ಅಲ್ಪಾವಧಿ ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಎ4–ಬಬಪಾ–ಫೀಡ್–ಸಿಆರ್–/2010–2011, ದಿನಾಂಕ:1ನೇ ಜನವರಿ, 2011**

ಕೆಳಗೆ ನಮೂದಿಸಿರುವಂತೆ ವಿವಿಧ ಸಾಮಗ್ರಿಗಳಿಗೆ ಈ ಕಛೇರಿಯಲ್ಲಿ ನೊಂದಾಯಿಸಿರುವ ಸರಬರಾಜುದಾರರಿಂದ 2010–11ನೇ ಸಾಲಿಗೆ ಟೆಂಡರ್ ಕರೆಯಲಾಗಿದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ಹಣ (ರೂ. ಲಕ್ಷಗಳಲ್ಲಿ) |
|---|---|---|---|---|
| 1. | 1 | ಮೃಗಾಲಯಕ್ಕೆ ದವಸ ಧಾನ್ಯ, ದ್ವಿದಳ ಧಾನ್ಯ, ಪಶು ಆಹಾರ ಇತ್ಯಾದಿ ಸರಬರಾಜು ಮಾಡುವುದು | 17.00 | 1.70 |

**ಷೆಡ್ಯೂಲ್ ದಿನಾಂಕ ಮತ್ತು ಸಮಯ:**

1) ಗುತ್ತಿಗೆದಾರರು ಪ್ರತಿಯೊಂದು ಘಟಕಕ್ಕೆ ಪ್ರತ್ಯೇಕವಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಲಾದ ಟೆಂಡರ್ ಫಾರಂ ಶುಲ್ಕ ರೂ.568/– (ತೆರಿಗೆಗಳು ಸೇರಿ) ಹಣ ಪಾವತಿಸಿ ದಿನಾಂಕ:16.01.2011 ರಿಂದ 18.01.2011 ರವರೆಗೂ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.
2) ಮೊಹರಾದ ಟೆಂಡರ್‌ಗಳನ್ನು ದಿನಾಂಕ:19.01.2011ರ ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 3.00 ವರೆಗೆ ಸ್ವೀಕರಿಸಲಾಗುವುದು ಹಾಗೂ ಸಾಯಂಕಾಲ 3.00 ಗಂಟೆಯ ನಂತರ ಸಲ್ಲಿಸಿದ ಮೊಹರಾದ ಟೆಂಡರ್ ಫಾರಂಗಳನ್ನು ಯಾವುದೇ ಕಾರಣದಿಂದ ಸ್ವೀಕರಿಸಲಾಗುವುದಿಲ್ಲ.
3) ಮೊಹರಾದ ಟೆಂಡರ್ ಲಕೋಟೆಯನ್ನು ದಿನಾಂಕ:19.01.2011 ರಂದು ಸಾಯಂಕಾಲ 4.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು (ಟೆಂಡರ್ ಆಹ್ವಾನಿಸುವ ಪ್ರಾಧಿಕಾರ) ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳು ಟೆಂಡರನ್ನು ತೆರೆಯುವರು.

**ಷರತ್ತುಗಳು:**

1) ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಮೃಗಾಲಯ ಪ್ರಾಧಿಕಾರ (ಟೆಂಡರ್ ಅಂಗೀಕರಿಸುವ ಪ್ರಾಧಿಕಾರ) ಇವರು ಟೆಂಡರುದಾರರಿಗೆ ಯಾವುದೇ ಸಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
2) ಯಾವುದೇ ಟೆಂಡರಿಗೆ ಇಡಗಂಟು ಸಲ್ಲಿಸದೇ ಇದ್ದರೆ ಅದನ್ನು ತಿರಸ್ಕರಿಸಲಾಗುವುದು. ಆದರೆ ಟೆಂಡರಿಗೆ ಇಡಗಂಟು ಸಲ್ಲಿಸಲು ಸರ್ಕಾರದಿಂದ ರಿಯಾಯಿತಿ ಪಡೆದಿದ್ದರೆ ಟೆಂಡರನ್ನು ಪರಿಗಣಿಸಲಾಗುವುದು.
3) ಟೆಂಡರ್ ವಿಷಯದಲ್ಲಿ ಯಾವುದೇ ವಿವರಗಳು/ ಷರತ್ತುಗಳು/ ಸ್ಪಷ್ಟೀಕರಣವನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು

ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು.

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**SHORT TERM RE-TENDER NOTIFICATION**

**No.A4-BBP-Feeding-CR-/ 2010-11, Dated:01.1.2011**

Sealed tenders are invited from the suppliers who were registered in this office for the works mentioned below for the year 2010-11.

**SCHEDULE**

| Sl. No. | Unit No | Particulars of Works | Approximate cost of tender (Rs. In Lakhs) | EMD (Rs. In lakhs) |
|---|---|---|---|---|
| 1. | 1 | Supply of food grains, pulses, cattle feed etc to the zoo | 17.00 | 1.70 |

**THE SCHEDULED DATES AND TIMES:**

1) The tender forms will be available in the office of the undersigned during the office hours from 16.01.2011 to 18.01.2011 on payment of Rs.568 (including taxes) separately for each unit.
2) Last date for receipt of sealed tender forms from 10:00 AM to 3.00 PM on 19.01.2011. No tender forms will be received after 3.00 P.M. on 19.01.2011.
3) Tenders will be opened by the Executive Director, BBP (Tender Inviting Authority) or an authorised officer by him on 19.01.2011 at 4.00 PM in presence of the concerned tenderers.

**CONDITIONS:**

1) The Member Secretary (Zoo Authority of Karnataka) being the tender accepting authority reserves the right to accept or reject any or all tenders without incurring any liability or obligation to inform the applicants of the reasons for such action.
2) Any tender submitted without the earnest money deposit (EMD) shall summarily rejected unless any category of tenderers specifically exempted by the Government from the payment of earnest money deposit (EMD).
3) Other detailed conditions can be had from the office of the undersigned during the office hours on all working days.

Executive Director,
Bannerghatta Biological Park, Bangalore-83

PD-1

**ಪದವಿ ಪೂರ್ವ ಶಿಕ್ಷಣ ಇಲಾಖೆ**

**ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–560012**

**(ನಿಯಮ 9)**

**ಅಧಿಸೂಚನೆ**

ಶ್ರೀ ತೆಲಿಗಿ ಮಂಜಪ್ಪ ಇವರು ಉಪನ್ಯಾಸಕರಾಗಿ, ಸರ್ಕಾರಿ ಪದವಿ ಪೂರ್ವ ಕಾಲೇಜು, ಉತ್ತಂಗಿ, ಹೂವಿನಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಇಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು ಇವರ ಹೆಸರು ಬದಲಾವಣೆಗೆ ನಿರ್ದೇಶಕರು, ಪ.ಪೂ.ಶಿ.ಇ. ಬೆಂಗಳೂರು ಇಲ್ಲಿ ತೆಲಿಗಿ ಮಂಜುನಾಥ್ ಎಂದು ಇವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ.
ಪದವಿ ಪೂರ್ವ ಶಿಕ್ಷಣ ಇಲಾಖೆ.

PD-150

**FORM - IV**

**(See Rule 12)**

**NOTICE**

It is hereby notified that the undersigned I have changed my name from **PARASAPPA DADU GHASTE** to **PARASHURAM DADU PATTANAKUDI**

PD-151 **PARASAPPA DADU GHASTE**

**FORM - IV**

**(See Rule 12)**

**NOTICE**

It is hereby notified that the undersigned I have changed my name from **Dr. PUSHPA LATHA R.** to **Dr. KIRTHANA R.**

PD-1 **Dr. PUSHPA LATHA R.**

ತುಮಕೂರು ವಿಶ್ವವಿದ್ಯಾನಿಲಯ

ತುಮಕೂರು–572 103

ಸಂಖ್ಯೆ: ತುವಿ:ತಾವಿ:458:2010–11, ದಿನಾಂಕ:29.11.2010

ಅಲ್ಪಾವಧಿ ಟೆಂಡರ್ ಪ್ರಕಟಣೆ

(ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ)

ಕೆಳಕಂಡ ಕಾಮಗಾರಿಗೆ ಅರ್ಹ ಟೆಂಡರ್‌ದಾರರಿಂದ ಕೆಳಕಂಡಂತೆ ಟೆಂಡರ್ ಕರೆಯಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಕಾಮಗಾರಿಯ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ. ಲಕ್ಷಗಳಲ್ಲಿ) | ಟೆಂಡರ್ ನಿರ್ವಹಣೆಯ ಶುಲ್ಕ (ರೂ. ಗಳಲ್ಲಿ) | ಕಾಮಗಾರಿಯ ಅವಧಿ ದಿನಗಳಲ್ಲಿ (ಮಳೆಗಾಲವೂ ಸೇರಿ) |
|---|---|---|---|---|---|
| 1 | ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾನಿಲಯದ ಹಾಸ್ಟೆಲ್ ಕಟ್ಟಡ ನಿರ್ಮಾಣ ಮಾಡುವುದು | 200.00 | 3.00 | ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಪ್ರಕಾರ | 300 |

ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಮಾತ್ರ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಪ್ರಕಟಣೆಯ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ವೆಬ್‌ಸೈಟ್ www.eproc.karnataka.gov.in ಮುಖಾಂತರ ದಿನಾಂಕ:15.01.2011ರವರೆಗೆ ಪಡೆಯಬಹುದು. ಉಳಿದ ವಿವರಗಳನ್ನು ಕೆಳಕಂಡ ಅಧಿಕಾರಿಯ ಕಛೇರಿಯಲ್ಲಿ ಪಡೆಯಬಹುದಾಗಿದೆ.

ಕಾರ್ಯಪಾಲಕ ಇಂಜಿನಿಯರ್,

ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು.

**TUMKUR UNIVERSITY**

**Tumkur- 572 103**

**No. TU/Eng/458 /2010-11, Dated:29.11.2010**

**SHORT TERM TENDER NOTIFICATION**

**(THROUGH E-PROCUREMENT ONLY)**

Item Rate Tender is invited from eligible Tenderers for the following work detailed in the Table given below.

| Sl. No. | Name of the Work | Apprx. Value of Work (Rs. In Lakhs) | EMD (Rs. In Lakhs) | Tender Processing Fee (In Rs.) | Period of Completion (in days) including monsoon |
|---|---|---|---|---|---|
| 1 | Construction of University Hostel for S.C. Boys at Tumkur | 200.00 | 3.00 | As per e-procurement Portal | 300 |

The Tender will be received through e-procurement mode only. The detailed notification regarding the subject enquiry in the e-procurement process can be obtained by logging on to website **www.eproc.karnataka.gov.in** upto 15.01.2011. The other details can be collected from the office of the under signed.

Executive Engineer,

PD-3

Tumkur University, Tumkur.

**ಕರ್ನಾಟಕ ಲೋಕಸೇವಾ ಆಯೋಗ**

**ಅಧಿಸೂಚನೆ**

**ಸಂಖ್ಯೆ: ಇ(2)760/2010–11/ಪಿಎಸ್‌ಸಿ, ದಿನಾಂಕ:25ನೇ ನವೆಂಬರ್, 2010**

**ವಿಷಯ:** 1) ಕೆ.ಎ.ಟಿ. ಅರ್ಜಿ ಸಂಖ್ಯೆ: 426/03, 12074, 12391 ಮತ್ತು 13961/02, 806–810/03, 12228/08, ಪ್ರಕರಣಗಳಿಗೆ ಸಂಬಂಧಿಸಿದಂತೆ ಬಾಕಿ ಇದ್ದಂತ ಅಬಕಾರಿ ಇಲಾಖೆಯಲ್ಲಿನ ಅಬಕಾರಿ ಉಪ ನಿರೀಕ್ಷಕರ 2ಎ/ಮಾ.ಸೈ–02, ಪ.ಜಾ/ಇತರೆ–01 ಮತ್ತು ಸಾ.ಅ./ಯೋ. ಅ–01 ಮೀಸಲಾತಿಯ ಒಟ್ಟು 04 ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** 1) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)30/2002–03/ ಪಿಎಸ್‌ಸಿ, ದಿನಾಂಕ:30.07.2002.

2) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)167/2003–04/ಪಿಎಸ್‌ಸಿ, ದಿನಾಂಕ:06.02.2004.

3) ದಿನಾಂಕ:24.01.2007ರ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ.

4) ದಿನಾಂಕ:29.07.2009ರ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ.

5) ಆಯೋಗದ ಅಧಿಸೂಚನೆ ಸಂಖ್ಯೆ:ಇ(2)679/2010–11/ಪಿಎಸ್‌ಸಿ, ದಿನಾಂಕ:27.10.2010.

ಆಯೋಗವು 2002ರಲ್ಲಿ ಅಧಿಸೂಚಿಸಲಾಗಿದ್ದ 245 ಹುದ್ದೆಗಳ ಅಬಕಾರಿ ಉಪ ನಿರೀಕ್ಷಕರ ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಇ(2)167/2003–04/ಪಿಎಸ್‌ಸಿ, ದಿನಾಂಕ:06.02.2004ರಂದು ಪ್ರಕಟಿಸಲಾಗಿದೆ. ಆದರೆ ಆಡಳಿತ ನ್ಯಾಯ ಮಂಡಳಿಯಲ್ಲಿನ ಅರ್ಜಿ ಸಂಖ್ಯೆ: 426/03, 12074, 12391 ಮತ್ತು 13961/02, 806–810/03 ಗಳಿಗೆ ಸಂಬಂಧಿಸಿದಂತೆ ಒಟ್ಟು 04 ಹುದ್ದೆಗಳನ್ನು (2ಎ/ಮಾ.ಸೈ–02, ಪ.ಜಾ/ಇತರೆ–01 ಮತ್ತು ಸಾ.ಅ/ಯೋ.ಅ–01) ಭರ್ತಿ ಮಾಡದೇ ಕಾಯ್ದಿರಿಸಲಾಗಿತ್ತು. ಮಾನ್ಯ ಉಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ: 12228/08ನ್ನು ಹೊರತು ಪಡಿಸಿ ಉಳಿದ ಅರ್ಜಿಗಳು ಇತ್ಯರ್ಥವಾಗಿರುವುದರಿಂದ, ರಿಟ್ ಅರ್ಜಿ ಸಂಖ್ಯೆ: 12228/08ಕ್ಕೆ ಸಂಬಂಧಿಸಿದಂತೆ, ನ್ಯಾಯಾಲಯದ ಅಂತಿಮ ತೀರ್ಪಿಗೆ ಬದ್ಧವಾಗಿರುವಂತೆ ಈ 04 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ–5ರಲ್ಲಿ ಪ್ರಕಟಿಸಲಾಗಿದ್ದು, ಸದರಿ ತಾತ್ಕಾಲಿಕ ಆಯ್ಕೆ ಪಟ್ಟಿಯ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತಗೊಂಡಿಲ್ಲದಿದ್ದು, ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳನ್ನೇ ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು, ವಿಳಾಸ ಮತ್ತು ನೋಂದಣಿ ಸಂಖ್ಯೆ | ಲಿಂಗ | ಜನ್ಮ ದಿನಾಂಕ | ಮೀಸಲಾತಿ | ಅಂಕಗಳು | ಷರಾ |
|---|---|---|---|---|---|---|
| 1. | ಶ್ರೀ ಆನಂದ ಜೆ.ಡಿ. (ನೋ.ಸಂ.65830) ಜನ್ನುಪುರ ಪೋಸ್ಟ್ ಮತ್ತು ವಿಲೇಜ್, ಮೂಡಗೆರೆ ತಾಲ್ಲೂಕು, ಜಿಲ್ಲೆ: ಚಿಕ್ಕಮಗಳೂರು–577132. | ಪುರುಷ | 02.03.59 | 2ಎ/ಮಾ.ಸೈ. | 63 | ದಿನಾಂಕ:06.02.2004ರಂದು ಪ್ರಕಟಿಸಲಾದ ಅಂತಿಮ ಆಯ್ಕೆ ಪಟ್ಟಿಯಲ್ಲಿನ ಕ್ರ.ಸಂ.245ರ ನಂತರದ ಜೇಷ್ಠತೆಯಲ್ಲಿ ಸೇರಿಸಿದೆ. |
| 2. | ಶ್ರೀ ನಾರಾಯಣಸಾ ಪವಾರ್, (ನೋ.ಸಂ.58873) S/o ಪಾರುಸಾ ಪವಾರ್, ಕಂಚಗರ ಗಲ್ಲಿ, ನಗರೇಶ್ವರ ದೇವಸ್ಥಾನ ಹಿಂದೆ ಹುಬ್ಬಳ್ಳಿ–580028. | ಪುರುಷ | 06.09.77 | 2ಎ/ಇತರೆ | 137 | ದಿನಾಂಕ:06.02.2004ರಂದು ಪ್ರಕಟಿಸಲಾದ ಅಂತಿಮ ಆಯ್ಕೆ ಪಟ್ಟಿಯಲ್ಲಿನ ಕ್ರ.ಸಂ.128 ಮತ್ತು 129ರ ಮಧ್ಯದ ಜೇಷ್ಠತೆಯಲ್ಲಿ ಸೇರಿಸಿದೆ. |
| 3. | ಶ್ರೀ ವಿಜಯಕುಮಾರ್ ಪಿ. ಶಲವಡಿ (ನೋ.ಸಂ.61322) ಮಸಾರಿ ಎಕ್ಸ್‌ಟೆನ್ಷನ್ ಠಾಗೋರ ರಸ್ತೆ, ಗದಗ ಜಿಲ್ಲೆ–582101. | ಪುರುಷ | 07.03.77 | ಪ.ಜಾ/ಇತರೆ | 133 | ದಿನಾಂಕ:06.02.2004ರಂದು ಪ್ರಕಟಿಸಲಾದ ಅಂತಿಮ ಆಯ್ಕೆ ಪಟ್ಟಿಯಲ್ಲಿನ ಕ್ರ.ಸಂ.155 ಮತ್ತು 156ರ ಮಧ್ಯದ ಜೇಷ್ಠತೆಯಲ್ಲಿ ಸೇರಿಸಿದೆ. |
| 4. | ಶ್ರೀ ಮಲ್ಲಪ್ಪ ಪಡಸಲಗಿ (ನೋ.ಸಂ.54527) At-ಚಿಕ್ಕಹಂಚನಾಳ ಪೋಸ್ಟ್–ಕೋಲೂರು, ತಾ: ಬೀಳಗಿ, ಜಿಲ್ಲೆ: ಬಾಗಲಕೋಟೆ–587301. | ಪುರುಷ | 01.06.78 | ಸಾ.ಅ./ಯೋ.ಅ | 129 | ದಿನಾಂಕ:06.02.2004ರಂದು ಪ್ರಕಟಿಸಲಾದ ಅಂತಿಮ ಆಯ್ಕೆ ಪಟ್ಟಿಯಲ್ಲಿನ ಕ್ರ.ಸಂ.164 ಮತ್ತು 165ರ ಮಧ್ಯದ ಜೇಷ್ಠತೆಯಲ್ಲಿ ಸೇರಿಸಿದೆ. |

**ಸೂಚನೆ:**

ಮೇಲ್ಕಂಡ ಆಯ್ಕೆ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 4ರಲ್ಲಿನ ಸಾಮಾನ್ಯ ಅರ್ಹತೆ/ ಯೋಜನಾ ನಿರಾಶ್ರಿತ ಮೀಸಲಾತಿಯ ಅಭ್ಯರ್ಥಿ ಶ್ರೀ ಮಲ್ಲಪ್ಪ ಪಡಸಲಗಿಯವರ ಆಯ್ಕೆಯು ಕರ್ನಾಟಕ ಉಚ್ಚ ನ್ಯಾಯಾಲಯದ W.P.No.12228/08 ರ ತೀರ್ಪಿಗೆ ಬದ್ಧವಾಗಿರುತ್ತದೆ.

**ವಿ.ಬಿ. ಪಾಟೀಲ್**

ಪಿ.ಆರ್.799

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ.